# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 107

ಸದಸ್ಯರ ಹೆಸರು : ಶ್ರೀ.ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 09.07.2018

| | | |
|---|---|---|
| (ಅ) | ಕಾರವಾರ ಜಿಲ್ಲೆಯ ಶಿರಸಿ ನಗರದ ಹೃದಯ ಭಾಗದಲ್ಲಿರುವ ದೇವಿಕೆರೆಯ ಪಿಂಚಿಂಗ್ ಕಾಮಗಾರಿ ಕುಸಿದು ಮಣ್ಣು ಕೆರೆ ಪಾಲಾಗಿರುವುದರಿಂದ ಲಕ್ಷಾಂತರ ರೂಪಾಯಿ ವೆಚ್ಚದಿಂದ ಮಾಡಿರುವ ಈ ಕಾಮಗಾರಿ ಸ್ವಲ್ಪ ದಿನಗಳಲ್ಲೇ ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ; (ವಿವರ ನೀಡುವುದು) | ಬಂದಿದೆ.<br><br>ಉತ್ತರ ಕನ್ನಡ ಜಿಲ್ಲೆಯ ಶಿರಸಿ ನಗರದ ದೇವಿಕೆರೆ ಕಾಮಗಾರಿಯನ್ನು ರೂ.2.50ಕೋಟಿಗಳಲ್ಲಿ ಅಭಿವೃದ್ಧಿಪಡಿಸಲು ಪ್ರವಾಸೋದ್ಯಮ ಇಲಾಖೆಯು ಕೆಆರ್ಐಡಿಎಲ್ ಸಂಸ್ಥೆಗೆ ದಿನಾಂಕ:06.10.2017ರಲ್ಲಿ ವಹಿಸಿರುತ್ತದೆ. ಇದರನ್ವಯ<br><br>• ದೇವಿಕೆರೆಯ Toe wall ಕಾಮಗಾರಿಯನ್ನು ಜನವರಿ-2018ರಲ್ಲಿ ಆರಂಭಿಸಿ, ಇದುವರೆವಿಗೂ ರೂ.50.00ಲಕ್ಷಗಳ ವೆಚ್ಚದಲ್ಲಿ Toe wall ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆ.<br>• ಉಳಿದ ಕಾಮಗಾರಿಗಳನ್ನು ಮಳೆಯ ಕಾರಣದಿಂದ ಆರಂಭಿಸಿರುವುದಿಲ್ಲ.<br>• ದಿನಾಂಕ: 09.06.2018 ರಿಂದ 12.06.2018 ರವರೆಗೆ ಸಾಮಾನ್ಯ ಮಳೆಗಿಂತ 10 ಪಟ್ಟು ಹೆಚ್ಚಾಗಿ ಮಳೆ ಬಂದಿರುವ ಕಾರಣ ಕೆರೆಯ 6 ಸ್ಥಳಗಳಲ್ಲಿ ಸ್ವಲ್ಪ ಮಣ್ಣು ಜರುಗಿರುತ್ತದೆ.<br><br>ಮಳೆಗಾಲ ಮುಗಿದ ನಂತರ ರೂ.200.00ಲಕ್ಷಗಳ ಮೊತ್ತದ ಬಾಕಿ ಉಳಿದಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಿ ಪ್ರವಾಸೋದ್ಯಮ ಇಲಾಖೆಗೆ ಹಸ್ತಾಂತರಿಸಲಾಗುವುದು. |

| | | |
|---|---|---|
| (ಆ) | ಸದರಿ ಅಭಿವೃದ್ಧಿ ಕಾಮಗಾರಿ ಲ್ಯಾಂಡ್ ಆರ್ಮಿ ಮುಖಾಂತರ ಮಾಡಿದ್ದು ಸಂಬಂಧಿಸಿದವರು ಪ್ರತಿಯೊಂದು ಕಾಮಗಾರಿಯಲ್ಲೂ ಕೂಡ ಕಳಪೆ ಮಟ್ಟದ ಕಾಮಗಾರಿ ಮಾಡುತ್ತಿರುವುದರಿಂದ ಜಿಲ್ಲೆಯಲ್ಲಿ ಇವರು ಮಾಡಿರುವ ಎಲ್ಲಾ ಅಭಿವೃದ್ಧಿ ಕೆಲಸ ಕಾರ್ಯಗಳು ನಿಷ್ಪ್ರಯೋಜಕ ಆಗಿರುವುದು ನಿಜವೇ: | • ಉತ್ತರ ಕನ್ನಡ ಜಿಲ್ಲೆಯಲ್ಲಿ ಕರ್ನಾಟಕ ಮೂಲ ಸೌಕರ್ಯ ಅಭಿವೃದ್ಧಿ ನಿಯಮಿತ (ಕೆಆರ್ಐಡಿಎಲ್) ಮುಖಾಂತರ ನಿರ್ವಹಿಸಿದ ಕಾಮಗಾರಿಗಳು ಗುಣಮಟ್ಟದ ಬಗ್ಗೆ ಇದುವರೆವಿಗೂ ಯಾವುದೇ ದೂರುಗಳು ಬಂದಿರುವುದಿಲ್ಲ. |
| (ಇ) | ಆಗಿದ್ದಲ್ಲಿ ಇವರು ಕಳೆದ ಮೂರು ವರ್ಷದ ಹಿಂದಿನಿಂದ ಇಲ್ಲಿಯವರೆಗೆ ಮಾಡಿರುವ ಪ್ರತಿಯೊಂದು ಕಾಮಗಾರಿಗಳ ವಿವರ ಪಡೆದು ಸ್ಥಳ ಪರಿಶೀಲನೆ ಮಾಡಿ ಆಗಿರುವ ಅವ್ಯವಹಾರಕ್ಕೆ ಸಂಬಂಧಿಸಿದ ಅಧಿಕಾರಿಗಳನ್ನು ಹೊಣೆ ಮಾಡಿ ಅವರ ಮೇಲೆ ಸರ್ಕಾರ ಸೂಕ್ತ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | **ಕಾಮಗಾರಿಗಳ ಗುಣಮಟ್ಟ ಕಳಪೆಯಾಗಿರುವುದು ಮತ್ತು ಹಣ ದುರುಪಯೋಗ ಆಗಿರುವ ಬಗ್ಗೆ ಯಾವುದೇ ತರಹದ ದೂರುಗಳು ಬಂದಲ್ಲಿ ಕೂಡಲೇ ರಾಜ್ಯಮಟ್ಟದ ಗುಣ ನಿಯಂತ್ರಕರನ್ನು ಕಾಮಗಾರಿಗಳ ಪರಿಶೀಲನೆ ಮಾಡಿ ವರದಿ ಮಾಡಲು ನೇಮಿಸಲಾಗುವುದು ಮತ್ತು ಆರೋಪಗಳು ದೃಢಪಟ್ಟಲ್ಲಿ ಸಂಬಂಧಪಟ್ಟವರ ಮೇಲೆ ಸೂಕ್ತ ಕ್ರಮ ಕೈಗೊಳ್ಳಲಾಗುವುದು.** |

ಸಂ.ಗ್ರಾಅಪ/26/ಕಗ್ರಾಮೂ/2018

(ಕೃಷ್ಣ ಭೈರೇಗೌಡ)
ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್,
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ
ಸಂಸದೀಯ ವ್ಯವಹಾರಗಳ ಸಚಿವರು